UIS
25-4-19

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 777

ಸದಸ್ಯರ ಹೆಸರು : ಶ್ರೀ ಎನ್.ಎಸ್.ಬೋಸ್‌ರಾಜು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಯಚೂರಿನಲ್ಲಿರುವ ಪ್ರಸ್ತುತ ಬಸ್ ನಿಲ್ದಾಣವನ್ನು ನಗರದ ಹೊರ ಭಾಗಕ್ಕೆ ಸ್ಥಳಾಂತರಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | 2016-17ನೇ ಸಾಲಿನಲ್ಲಿ ರೂ.400.00 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಿರುವ ರಾಯಚೂರಿನ ನೂತನ ಬಸ್ ನಿಲ್ದಾಣವು ಕಾರ್ಯಾಚರಣೆಯಲ್ಲಿದೆ. ಪ್ರಸ್ತುತ ನಗರದ ಹೊರ ಭಾಗಕ್ಕೆ ಸ್ಥಳಾಂತರಿಸುವ ಪ್ರಸ್ತಾವನೆ ಇರುವುದಿಲ್ಲ. |
| ಆ) | ನೂತನ ತಾಲ್ಲೂಕು ಕೇಂದ್ರ ಸಿರವಾರ ಪಟ್ಟಣದಲ್ಲಿ ಹೊಸ ಬಸ್ ನಿಲ್ದಾಣ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ನೂತನ ತಾಲ್ಲೂಕು ಕೇಂದ್ರ ಸಿರವಾರ ಪಟ್ಟಣದಲ್ಲಿ 1990ರಲ್ಲಿ ಸರ್ವೆ ಸಂ.419ರಲ್ಲಿನ 1 ಎಕರೆ ನಿವೇಶನದಲ್ಲಿ ನಿರ್ಮಿಸಿರುವ ಬಸ್ ನಿಲ್ದಾಣವು ಕಾರ್ಯಾಚರಣೆಯಲ್ಲಿದೆ. ಪ್ರಸ್ತುತ ಹೊಸ ಬಸ್ ನಿಲ್ದಾಣ ನಿರ್ಮಾಣ ಮಾಡುವ ಪ್ರಸ್ತಾವನೆ ಇರುವುದಿಲ್ಲ. |
| ಇ) | ಲಿಂಗಸುಗೂರು ಪಟ್ಟಣದಲ್ಲಿ ನೂತನ ಬಸ್ ನಿಲ್ದಾಣ ಕಾಮಗಾರಿಯನ್ನು ಪೂರ್ಣಗೊಳಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಕಾಮಗಾರಿ ಪೂರ್ಣಗೊಳ್ಳುವುದು ಯಾವಾಗ; | ಲಿಂಗಸುಗೂರು ಪಟ್ಟಣದಲ್ಲಿ ನೂತನ ಬಸ್ ನಿಲ್ದಾಣದ ಮುಖ್ಯ ಕಟ್ಟಡವನ್ನು ರೂ.250.00 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲಾಗುತ್ತಿದ್ದು, ಕಾಮಗಾರಿ ಪ್ರಗತಿಯಲ್ಲಿದೆ. ಆವರಣದ ಅಭಿವೃದ್ಧಿ ಕಾಮಗಾರಿಯನ್ನು ರೂ.90.00 ಲಕ್ಷಗಳಲ್ಲಿ ಕೈಗೊಳ್ಳಲು ಮಂಜೂರಾತಿ ನೀಡಿದ್ದು, ಟೆಂಡರ್ ಪ್ರಕ್ರಿಯೆ ಜಾರಿಯಲ್ಲಿದೆ. 2019-20ನೇ ಸಾಲಿನಲ್ಲಿ ಕಾಮಗಾರಿಯನ್ನು ಪೂರ್ಣಗೊಳಿಸಲಾಗುತ್ತದೆ. |
| ಈ) | ರಾಯಚೂರು ಜಿಲ್ಲೆ ಲಿಂಗಸುಗೂರು ಪಟ್ಟಣದಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ ಪ್ರಾರಂಭಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; | ರಾಯಚೂರು ಜಿಲ್ಲೆಯ ಲಿಂಗಸುಗೂರು ಅಥವಾ ಸಿಂಧನೂರು ತಾಲ್ಲೂಕುಗಳಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿಯನ್ನು ಪ್ರಾರಂಭಿಸುವ ಪ್ರಸ್ತಾವನೆ ಪರಿಶೀಲನೆಯಲ್ಲಿದೆ. |
| ಉ) | ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲ್ಲೂಕಿನ ಮುದಗಲ್ ಪಟ್ಟಣದಲ್ಲಿ ಬಸ್ ಡಿಪೋ ನಿರ್ಮಾಣ ಮಾಡಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಪ್ರತಿ ದಿನ ಮುದಗಲ್ಲ ಪಟ್ಟಣಕ್ಕೆ ವಿವಿಧ ಡಿಪೋಗಳಿಂದ ಸಂಚರಿಸುತ್ತಿರುವ ಬಸ್‌ಗಳ ಸಂಖ್ಯೆ ಹಾಗೂ ಮಾರ್ಗಗಳಾವುವು? | ಲಿಂಗಸುಗೂರು ತಾಲ್ಲೂಕಿನಲ್ಲಿರುವ ಮುದಗಲ್ ಪಟ್ಟಣವು ಒಂದು ಹೋಬಳಿ ಕೇಂದ್ರವಾಗಿದ್ದು, ಸಂಸ್ಥೆಯ ನಿಯಮಗಳ ಪ್ರಕಾರ ಹೋಬಳಿ ಮಟ್ಟದಲ್ಲಿ ಬಸ್ ಘಟಕಗಳು ನಿರ್ಮಿಸಲು ಅವಕಾಶಗಳಿರುವುದಿಲ್ಲ.<br>ಪ್ರತಿ ದಿನ ಮ್ಯುದ್ದಗಲ್ ಪಟ್ಟಣಕ್ಕೆ ವಿವಿಧ ಘಟಕಗಳಿಂದ ಒಟ್ಟು 207 ಸಾರಿಗೆಗಳು ಮಸ್ಕಿ, ತಾವರಗೆರ, ದೋಟಿಹಾಳ, ಇಲಕಲ್, ಕಾಚಾಪುರ, ಮುದೇನೂರು, ಲಿಂಗಸುಗೂರು, ರೋಣ, ಮಾರದಿನ್ನಿ, ಸಂತೆಕೆಲ್ಲೂರ, ದೇಸಾಯಿ ಬೋಗಾಪೂರ, ಕಂದಗಲ್ಲು, ರಾಯಚೂರು, ದಾವಣಗೆರೆ, ಬೆಳಗಾವಿ, ಕಾರವಾರ, ಗೋಕಾಕ್, ಮಂತ್ರಾಲಯ, ಧಾರವಾಡ, ಬಾಗಲಕೋಟೆ, ಮಂಗಳೂರು, ಕಲಬುರಗಿ, ಬೆಂಗಳೂರು, ಹೊಸಪೇಟೆ, ಧರ್ಮಸ್ಥಳ, ಹೈದರಾಬಾದ್ ಮಾರ್ಗವಾಗಿ ಕಾರ್ಯಾಚರಣೆಯಲ್ಲಿರುತ್ತವೆ. |

ಸಂಖ್ಯೆ: ಟಿಡಿ 48 ಟಿಸಿಕ್ಯೂ 2019

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿ ಹಾಗೂ
ಸಾರಿಗೆ ಸಚಿವರು